1731431/2020/BU

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 284
ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 22.09.2020
ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ನಗರದ ಎಸ್.ಎಂ.ಕೆ. ಬಡಾವಣೆಯಲ್ಲಿ ಎಷ್ಟು ನಿವೇಶನಗಳನ್ನು ನಿರ್ಮಾಣ ಮಾಡಲಾಗಿದೆ. ಹಾಗೂ ಹಂಚಿಕೆ ಮಾಡಿರುವ ನಿವೇಶನಗಳೆಷ್ಟು: ಹಂಚಿಕೆಯಾಗದೆ ಉಳಿದಿರುವ ನಿವೇಶನಗಳೆಷ್ಟು: ಇಲ್ಲಿ ವಸತಿ ನಿರ್ಮಾಣ ಮಾಡಲು ಅಗತ್ಯವಿರುವ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆಯೇ: ಈ ಬಡಾವಣೆಯಲ್ಲಿ ನಿವೇಶನದಾರರಿಗೆ ಮನ ಕಟ್ಟಿಕೊಳ್ಳಲು ಪರವಾನಗಿ ನೀಡಲಾಗುತ್ತಿದೆಯೇ: (ವಿವರ ನೀಡುವುದು) | **ಹಾಸನ ನಗರಾಭಿವೃದ್ಧಿ ಪ್ರಾಧಿಕಾರದಿಂದ ಒಟ್ಟು 453 ಎಕರೆ ಪ್ರದೇಶದಲ್ಲಿ ಎಸ್.ಎಂ.ಕೆ.ನಗರ ಬಡಾವಣೆಯನ್ನು ನಿರ್ಮಾಣ ಮಾಡಲಾಗಿದೆ.**<br>• ಈ ಬಡಾವಣೆಯಲ್ಲಿ ರಚಿಸಲಾಗಿರುವ ಒಟ್ಟು ನಿವೇಶನಗಳ ಸಂಖ್ಯೆ - **6335**<br>• ರಚಿಸಲಾಗಿರುವ ಮೂಲೆ ನಿವೇಶನಗಳು- **801**<br>• ಹಂಚಿಕೆ ಮಾಡಿರುವ ನಿವೇಶನಗಳು- **5027** (ಭೂಮಾಲೀಕರು & ಸಾರ್ವಜನಿಕರಿಗೆ)<br>• ಹಂಚಿಕೆಯಾಗದೆ ಉಳಿದಿರುವ ನಿವೇಶನಗಳು- **507**<br><br>ಈ ಬಡಾವಣೆಗೆ ಅಗತ್ಯವಿರುವ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆ.<br><br>ಈ ಬಡಾವಣೆಯಲ್ಲಿ ನಿವೇಶನದಾರರಿಗೆ ಮನೆ ಕಟ್ಟಿಕೊಳ್ಳಲು ಪರವಾನಗಿ ನೀಡಲಾಗುತ್ತಿದೆ. |
| ಆ) | ಸದರಿ ಬಡಾವಣೆಯ ಅಭಿವೃದ್ಧಿಗಾಗಿ ಇಲ್ಲಿಯವರೆಗೆ ಕೈಗೊಂಡಿರುವ ಕಾಮಗಾರಿಗಳು ಯಾವುವು: ಈ ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗಿದೆ: ಈ ಕಾಮಗಾರಿಗಳ ವೆಚ್ಚವೆಷ್ಟು: ಈ ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು: ಈ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರ ವಿವರಗಳೇನು: (ಕಾಮಗಾರಿವಾರು ಮಾಹಿತಿ ನೀಡುವುದು) | ಹಾಸನ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅಭಿವೃದ್ಧಿಪಡಿಸಿರುವ ಎಸ್.ಎಂ.ಕೆ.ನಗರ ಬಡಾವಣೆಯಲ್ಲಿ ರಸ್ತೆಗಳು, ಚರಂಡಿಗಳು, ಕಲ್ವರ್ಟ್‌ಗಳು, ಬ್ರಿಡ್ಜ್‌ಗಳು, ಮಳೆ ಚರಂಡಿ ನಿರ್ಮಾಣ, ಪಾರ್ಕ್ ಅಭಿವೃದ್ಧಿ, ಯು.ಜಿ.ಡಿ. ಎಸ್.ಟಿ.ಪಿ. ಕಾಮಗಾರಿಗಳು, ವಿದ್ಯುದ್ಧೀಕರಣ ಕಾಮಗಾರಿ, ನೀರು ಸರಬರಾಜು ವ್ಯವಸ್ಥೆ, ಆರ್ಚ್ ಗೇಟ್ ಹಾಗೂ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br><br>• ಈ ಬಡಾವಣೆಯ ಕಾಮಗಾರಿಗಳನ್ನು ಪ್ರಾರಂಭಿಸಿದ ದಿನಾಂಕ:07.01.2016<br>• ಕಾಮಗಾರಿಗಳ ವೆಚ್ಚ ರೂ.298.00ಕೋಟಿಗಳು<br>• ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ಬಿಡುಗಡೆ ಮಾಡಲಾಗಿರುವ ವೆಚ್ಚ ರೂ.294.00ಕೋಟಿ<br>• ಈ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರ ವಿವರ:<br>ಮೆ\|\| ಬಿ.ಎಸ್.ಆರ್.ಇಂಡಿಯಾ ಲಿಮಿಟೆಡ್ ಮತ್ತು ಮೆ\|\| ಸ್ಟಾರ್ ಬಿಲ್ಡರ್ಸ್ & ಡೆವಲ್ಪರ್ಸ್ (ಜೆ.ವಿ), ಬೆಂಗಳೂರು |
| ಇ) | ಹಾಸನ ನಗರದ ಎಸ್.ಎಂ.ಕೆ. ಬಡಾವಣೆಯ ಅಭಿವೃದ್ಧಿಗಾಗಿ ಕೈಗೊಂಡಿರುವ ಕಾಮಗಾರಿಗಳಲ್ಲಿ ಹಣ ದುರ್ಬಳಕೆಯಾಗಿರುವ ಬಗ್ಗೆ ದೂರುಗಳು ಬಂದಿವೆಯೇ: ದೂರುಗಳು ಬಂದಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳ | ಬಡಾವಣೆಯ ಅಭಿವೃದ್ಧಿಗಾಗಿ ಕೈಗೊಂಡಿರುವ ಕಾಮಗಾರಿಗಳಲ್ಲಿ ಹಣ ದುರ್ಬಳಕೆಯಾಗಿರುವ ಬಗ್ಗೆ ದೂರುಗಳು ಬಂದಿರುವುದಿಲ್ಲ. |

| | | |
|---|---|---|
| | ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ: (ದೂರುಗಳ ವಿವರದೊಂದಿಗೆ ಮಾಹಿತಿ ನೀಡುವುದು) | |

**ಸಂಖ್ಯೆ: ನಅಇ 24 ಎಲ್‌ಸಿಕ್ಯೂ 2020 (ಇ-ಕಡತ)**

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.